# ಬೌದ್ಧ ಸಂಸ್ಕೃತಿಯ ಬೆಳಕಿಂಡಿ
# ಕಾರ್ಲೆ ಗುಹೆಗಳು

ಚಿತ್ರ–ಲೇಖನ: ಎನ್.ಸಿ. ದೇಸಾಯಿ

**ಕಾ**ರ್ಲೆ ಮುಂಬೈ ಪುಣೆ ಮಾರ್ಗದಲ್ಲಿರುವ ಒಂದು ಸುಂದರ ಪ್ರಶಾಂತ ಹಳ್ಳಿ. ಬೌದ್ಧ ಸಂಸ್ಕೃತಿಯ ವಾಸ್ತುಶಿಲ್ಪಕ್ಕೆ ಉಜ್ವಲ ನಿದರ್ಶನವಾಗಿರುವ ಅಲ್ಲಿರುವ ಗುಹೆಗಳಿಂದ ಕಾರ್ಲೆ ಭಾರತದಾದ್ಯಂತ ಪ್ರಸಿದ್ಧವಾಗಿವೆ. ಬೌದ್ಧಧರ್ಮದ ಹೀನಾಯಾನ ಹಾಗೂ ಮಹಾಯಾನ ಪಂಥದ ಬೌದ್ಧ ಸನ್ಯಾಸಿಗಳ ಆರಾಧನಾ ಸ್ಥಳವಾಗಿ ಈ ಗುಹೆಗಳು ಕ್ರಿ.ಶಕ ಆರಂಭದ ಎರಡು ಶತಮಾನಕ್ಕೂ ಹಿಂದೆ ನಿರ್ಮಾಣವಾದವು. ನಿಸರ್ಗ ನಿರ್ಮಿತ ಕಡಿದಾದ ಕಲ್ಲು ಬಂಡೆಗಳಲ್ಲಿ ಕೊರೆದ ಈ ಗುಹೆಗಳನ್ನು ಬೌದ್ಧ ಸನ್ಯಾಸಿಗಳು ಮಳೆಗಾಲದ ತಿಂಗಳುಗಳಲ್ಲಿ ಪೂಜೆ ಹಾಗೂ ಪ್ರಾರ್ಥನೆಗೆ ಬಳಸುತ್ತಿದ್ದರು.

ಕಾರ್ಲೆಹಳ್ಳಿಯ ಉತ್ತರಕ್ಕೆ ಸುಮಾರು ಎರಡು ಮೈಲಿ ಅಂತರದಲ್ಲಿರುವ ಮೆಹಗಾಂವ್ ಹಳ್ಳಿಯ



ಸೆಠಿ ಭುತ್‌ಪಾಲನು ನಿರ್ಮಿಸಿದ ಶಿಲಾಭವನ



ಕಾರ್ಲೆಯ ಸ್ತೂಪ

ಸಮೀಪದಲ್ಲಿ ಈ ಗುಹೆಗಳಿವೆ. ಮೊದಲು ಬೌದ್ಧ ಧರ್ಮದ ಹೀನಾಯಾನ ಪಂಥದ ನಿಯಮಗಳ ಮೇರೆಗೆ ಇಲ್ಲಿ ಗುಹೆಗಳು ನಿರ್ಮಾಣವಾದವು. ಅವುಗಳನ್ನು ಅವರು 'ವಿಹಾರ' 'ಚೈತ್ಯ' ಎಂಬೆಲ್ಲ ಹೆಸರುಗಳಿಂದ ಕರೆಯುತ್ತಿದ್ದರು. ಚೈತ್ಯದಲ್ಲಿ ಪ್ರಾರ್ಥನೆಗಾಗಿ ಸ್ತೂಪ ಇರುತ್ತಿತ್ತು.

ಮಹಾಯಾನ ಪಂಥದವರ ಗುಹೆಗಳಲ್ಲಿ ಮುಖ್ಯ ಪ್ರಾರ್ಥನಾ ಸ್ಥಳದಲ್ಲಿ ಅವಲೋಕಿತೇಶ್ವರ ಬುದ್ಧನ ಮೂರ್ತಿಗೆ ಪ್ರಾಮುಖ್ಯ ನೀಡಲಾಗುತ್ತಿತ್ತು.

ಹೀನಾಯಾನ ಪಂಥದವರು ನಿರ್ಮಿಸಿದ ಕಾರ್ಲೆಗುಹೆಗಳಲ್ಲಿ ಚೈತ್ಯಗಳು ಆಕರ್ಷಣೀಯ ಭಾಗವಾಗಿವೆ. ಈ ಚೈತ್ಯಗಳು ಬೃಹದಾಕಾರದ ಸ್ತಂಭಗಳಿಂದ ಕೂಡಿದ್ದು ಸುಂದರವಾದ ಅಲಂಕೃತ ಕೆತ್ತನೆಯಿಂದ ಕೂಡಿವೆ. ದ್ವಾರದ ಇಬ್ಬದಿಗಳಲ್ಲಿ ಕೆತ್ತನೆಯ ಕಿಟಕಿಗಳಿರುತ್ತಿದ್ದವು. ಸ್ತೂಪಗಳು ಕೊನೆಯಲ್ಲಿ ಹಾಗೂ ಮಧ್ಯ ಭಾಗದಲ್ಲಿ ಅಲಂಕೃತವಾಗಿರುತ್ತಿದ್ದವು. ಚೈತ್ಯಗಳಲ್ಲಿ ನಾಲ್ಕೂ ನಿಟ್ಟಿನಲ್ಲಿ ಮುಖಮಾಡಿದ ಸಿಂಹಮುಖಗಳನ್ನು ಹೊತ್ತ ಅಶೋಕ ಸ್ತಂಭವೂ ಇರುತ್ತಿತ್ತು.

ಕ್ರಿ.ಶಕ ಪೂರ್ವದ 3ನೇ ಶತಮಾನದಲ್ಲಿ ಚಕ್ರವರ್ತಿ ಅಶೋಕ ಬೌದ್ಧಧರ್ಮದ ತತ್ವಗಳನ್ನು ಸಾರಲು ಆರಂಭಿಸಿದಾಗ ಬೌದ್ಧಧರ್ಮ ದಕ್ಷಿಣ ಭಾರತಕ್ಕೆ ಪ್ರವೇಶಿಸಿತು. ಈ ಉದ್ದೇಶದಿಂದಲೇ ಸಮ್ರಾಟ ಅಶೋಕನು ಬೌದ್ಧ ಸನ್ಯಾಸಿ 'ಧರ್ಮರಕ್ಷಿತಾ' ಎಂಬವನನ್ನು ದಕ್ಷಿಣ ಭಾರತಕ್ಕೆ ಕಳುಹಿಸಿದ. ಈ ರೀತಿಯ ಬೌದ್ಧಧರ್ಮ ಪ್ರಚಾರ 'ಅಪರಂತಾ' ಎಂದು ಹೆಸರಾಗಿತ್ತು. ಹಿಂದ್ದಿನ ಕಾಲದಲ್ಲಿ ಪಶ್ಚಿಮಘಟ್ಟ ಪ್ರದೇಶದಲ್ಲಿ ಶಖ ಹಾಗೂ ಪಾರ್ಥಿಯನ್ನರು ಹೆಚ್ಚಿನ ಸಂಖ್ಯೆಯಲ್ಲಿ ನೆಲಸಿದ್ದರು. ಇವರು ಪರದೇಶಗಳಿಂದ ವ್ಯಾಪಾರಕ್ಕಾಗಿ ಇಲ್ಲಿಗೆ ಬಂದಿದ್ದರು. ಹೀಗಾಗಿ ಇವರನ್ನು 'ಯವನರು' ಎಂದು ಸಂಭೋದಿಸುವ ಕ್ರಮವೂ ರೂಢಿಯಲ್ಲಿತ್ತು. ಅವರಲ್ಲಿ ಸೌರಾಷ್ಟ್ರದ ರಾಜ್ಯಪಾಲನಾಗಿದ್ದ 'ತುಷಾಸ್ತ' ಎಂಬವನೇ ಮುಖ್ಯಧರ್ಮ ಪ್ರಚಾರಕನಾಗಿದ್ದ.

## ವ್ಯಾಪಾರ ಮಾರ್ಗಗಳ ಮಹತ್ವ

ಕ್ರಿಸ್ತಶಕ ಪೂರ್ವದಲ್ಲಿ ಪಶ್ಚಿಮಘಟ್ಟ ಪ್ರದೇಶದಲ್ಲಿ ಎರಡು ಬಂದರುಗಳು ಕಾರ್ಯನಿರ್ವಹಿಸುತ್ತಿದ್ದವು. ಒಂದು ಭರೂಚ (ಹಿಂದಿನ ಭರುಕಚ್ಚಾ) ಎರಡನೆಯದು ಸೋಪಾರಾ. (ಹಿಂದಿನ ಸುರಪಾರಕ) ಈ ಎರಡು ಬಂದರುಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಸಾತವಾಹನರು, ಕ್ಷತ್ರಪರು ಕಚ್ಚಾಡುತ್ತಿದ್ದರು. ಹೊರಗಿನಿಂದ ಬರುತ್ತಿದ್ದ ಹಡಗುಗಳ ದಾರಿ ತಪ್ಪಿಸಿ ಕಚ್ಛ ಹಾಗೂ ಭರೂಚದ ಕೊಲ್ಲಿಯೆಡೆಗೆ ಕಳುಹಿಸುವ ಕುತಂತ್ರವನ್ನೂ ಮಾಡಿದ್ದುಂಟು.

ಸೋಪಾರದ ಕೊಲ್ಲಿಯಲ್ಲಿ (ಸಮುದ್ರದ ಹಿನ್ನೀರು) ಎರಡು ಮಹತ್ವದ ಬಂದರುಗಳಿದ್ದವು. ಕಲ್ಯಾಣ ಮತ್ತು ಚೆವುಲ. ಕಲ್ಯಾಣ ಬಂದರು ವರೆಗೆ ಚಿಕ್ಕ ಹಡಗುಗಳು ತಲುಪುವ ವ್ಯವಸ್ಥೆ ಇದ್ದಿತು. ಮುಂಬಯಿಯಿಂದ ಉತ್ತರಕ್ಕೆ 30 ಮೈಲಿ ದೂರದಲ್ಲಿರುವ ಕಾನ್ಹೇರಿ ಗುಹೆಗಳಲ್ಲಿ ಈ ವಿಷಯವನ್ನು ಅರುಹುವ ಶಿಲಾಶಾನವಿದೆ.



ಗಜ ಮತ್ತು ಮಿಥುನ ಕೆತ್ತನೆಗಳು

ಅಂದು ಮೂರು ಪ್ರಮುಖ ವ್ಯಾಪಾರ ಮಾರ್ಗಗಳಲ್ಲಿ ಸರಕುಗಳ ಸಾಗಾಣಿಕೆ ನಡೆಯುತ್ತಿತ್ತು. ಮುಂಬಯಿ ಆಗ್ರ ಮಾರ್ಗದಲ್ಲಿ ತಲಘಾಟವನ್ನು ನಾಶಿಕ ಮತ್ತು ಔರಂಗಬಾದ ಮಾರ್ಗವಾಗಿ ಸಾಂಚಿಯನ್ನು, ಮುಂಬೈ ಪುಣೆ ಮಾರ್ಗದಲ್ಲಿಯ ಬೋರಘಾಟನ್ನು ದಾಟಿ ತೇರ, ಉಸ್ಮಾನಾಬಾದ್ ಹಾಗೂ ಮರಾಠ

ಪ್ರದೇಶಕ್ಕೆ ಸಾರಿಗೆ ವ್ಯವಸ್ಥೆ ಇದ್ದಿತು. ಈ ವ್ಯಾಪಾರ ಮಾರ್ಗಗಳ ವ್ಯವಸ್ಥೆಯಿಂದಾಗಿ ಈ ಭಾಗದಲ್ಲಿ ಬೌದ್ಧ ಪ್ರಾರ್ಥನಾ ಮಂದಿರಗಳು ನಿರ್ಮಾಣವಾದವು.

ಕಾರ್ಲೆ ಗುಹೆಯ ಚೈತ್ಯಗಳು ಭವ್ಯವಾಗಿವೆ. ಶಿಲ್ಪಕಲಾ ಸೌಂದರ್ಯಕ್ಕೂ ಅವು ಹೆಸರಾಗಿವೆ. ಪ್ರತಿಯೊಂದು ಚೈತ್ಯದ ಮುಂಭಾಗದಲ್ಲಿ ಹದಿನೈದು ಅಡಿ ಉದ್ದ ಹಾಗೂ ಐವತ್ತೆರಡು ಅಡಿ ಅಗಲವಿರುವ ವಿಶಾಲ ಮೈದಾನವಿದೆ. ಇದರ ಮುಂಭಾಗದಲ್ಲಿ ಮಿಥುನ ಹಾಗೂ ಆನೆಯ ಶಿಲ್ಪಗಳಿವೆ. ಬೌದ್ಧ ಸನ್ಯಾಸಿಗಳು ಧನಸಹಾಯ ಮಾಡಿ ಇವುಗಳನ್ನು ನಿರ್ಮಿಸಿದರೆಂದು ಪ್ರತೀತಿ ಇದೆ.



ಸ್ತ್ರೀ ವಿಗ್ರಹಗಳ ಕೇಶಾಲಂಕಾರ ಬೆಡಗು

ವಿಶಾಲವಾದ ಚೈತ್ಯದ ಸೂರುಗಳು ಕಮಾನುಗಳನ್ನು ಸಂಪೂರ್ಣವಾಗಿ ಕಾಷ್ಠದಿಂದ ತಯಾರಿಸಲಾಗಿದೆ. 'ಧೇನುಕಾಕಾ'ದಿಂದ ಬಂದ ಬಡಿಗರು ಅದನ್ನು ತಯಾರಿಸಿದರೆಂಬ ಉಲ್ಲೇಖಗಳೂ ಇವೆ. ಕೆಲವು ಮುಖದರ್ಶನದ ಭಿತ್ತಿಕೆತ್ತನೆಗಳು ನಾಲ್ಕು ಅಂತಸ್ತುಗಳಲ್ಲಿ ನಿರ್ಮಾಣವಾಗಿದ್ದು, ಮೂರ್ತಿಗಳನ್ನಿರಿಸಲು ಮಾಡಗಳು ನಿರ್ಮಾಣವಾಗಿವೆ. ಗುಹೆಯ ಒಳಗಡೆ

ಯಥೇಚ್ಛ ಬೆಳಕು ಹರಿಯಲು ಕಿಡಕಿಗಳನ್ನು ನಿರ್ಮಿಸಲಾಗಿದೆ.

### ಅತಿದೊಡ್ಡ ಚೈತ್ಯ

ಕಾರ್ಲೆಯ ಅತಿದೊಡ್ಡ ಚೈತ್ಯವು 124 ಅಡಿ 3 ಅಂಗುಲ ಉದ್ದವಿದ್ದು 45 ಅಡಿ 6 ಅಂಗುಲ ಅಗಲವಿದೆ. ಮಧ್ಯಭಾಗದ ಸೂರಿನ ಎತ್ತರ 46 ಅಡಿ ಇದೆ. ಈ ಚೈತ್ಯದಲ್ಲಿ ಕಮಾನಿನಾಕಾರದ ಜಂತಿಗಳನ್ನು ಕಾಷ್ಠದಿಂದಲೇ ನಿರ್ಮಿಸಲಾಗಿದೆ. ಕಾಷ್ಠದ ಜಂತಿಗಳು ಶಿಲಾಸ್ತಂಭಗಳಿಗೆ ಆಧಾರವಾಗಿವೆ. ಒಟ್ಟು 37 ಸ್ತಂಭಗಳು ಈ ಚೈತ್ಯದಲ್ಲಿವೆ.

ಕಾರ್ಲೆಯ ಸ್ತೂಪಗಳ ಅಲಂಕೃತ ಪಟ್ಟಿಗಳು ಹಾಗೂ ಮೇಲಿನ ಛತ್ರಿ ಸಾಂಚಿಯ ಸ್ತೂಪವನ್ನು ಹೋಲುತ್ತವೆ.

ಸ್ತೂಪಗಳ ಮೇಲೆ ಸೂರ್ಯನ ಬೆಳಕು ಧಾರಾಳವಾಗಿ ಬೀಳುವಂತೆ ಮಾಡಿರುವ ವ್ಯವಸ್ಥೆಯನ್ನು ನೋಡಿದಾಗ ಅಂದಿನಕಾಲದ ವಾಸ್ತುತಜ್ಞರ ಎಂಜಿನಿಯರಿಂಗ್ ಚಾತುರ್ಯ ದಿಗ್ಭ್ರಮೆಗೊಳಿಸುತ್ತದೆ.

ಬೆಟ್ಟದ ಮೇಲಿನ ಬಂಡೆಯಲ್ಲಿ ಕೊರೆದ ಕಾರ್ಲೆಯ ಚೈತ್ಯಗುಹೆಗಳು ವ್ಯಾಪಾರಿ ಮಾರ್ಗದಲ್ಲಿದ್ದ ಕಾರಣ ಅವುಗಳ ನಿರ್ಮಾಣಕ್ಕೆ ದಾನಿಗಳು ಸುಲಭವಾಗಿ ದೊರೆತರು. 'ಧೇನುಕಾಕಾ'ದ ಯವನರು ಈ ದಿಶೆಯಲ್ಲಿ ಉಪಯುಕ್ತ ಕಾರ್ಯ ಮಾಡಿದರೆಂದು ಗುಹೆಯಲ್ಲಿರುವ ಕೆಲವು ಶಾಸನಗಳು ಹೇಳುತ್ತವೆ. ಆದರೆ



ಚೈತ್ಯದ ಎತ್ತರದ ಕಾಷ್ಠ ಜಂತಿಗಳನ್ನು ಹೊಂದಿದ ಛತ್ತು

ಧೇನುಕಾಕಾ ಎಲ್ಲಿತ್ತು ಎಂಬುದು ಇಂದಿಗೂ ನಿಗೂಢ ಒಗಟಾಗಿದೆ.

ಕಾರ್ಲೆಯ ಗುಹೆಗಳ ಒಳಗೆ ಬಂಡೆಗಳಲ್ಲಿ ಸ್ತ್ರೀ ಪುರುಷರ ವಿವಿಧ ಅಂಗಭಂಗಿಗಳನ್ನು ವರ್ಣಿಸುವ ಮಿಥುನ ಶಿಲ್ಪಗಳಿವೆ. ಗಾತ್ರದಲ್ಲಿ ದೊಡ್ಡದಾಗಿರುವ ಈ ಶಿಲ್ಪಗಳ ವೇಷಭೂಷಣ, ಒಡವೆಗಳ ಸ್ವರೂಪ, ಮೈಮಾಟ ವೈವಿಧ್ಯಮಯವಾಗಿವೆ. ಸೌಂದರ್ಯದಲ್ಲಿ, ಗಾಂಭೀರ್ಯದಲ್ಲಿ ಅವು ಮಥುರಾದಲ್ಲಿರುವ ಪ್ರಸಿದ್ಧ ಯಕ್ಷಿಯರಿಗಿಂತಲೂ ಮಿಗಿಲಾಗಿವೆ ಎಂದು ಕಲಾವಿಮರ್ಶಕರು ಅಭಿಪ್ರಾಯಪಡುತ್ತಾರೆ.



ಚೈತ್ಯದ ಕಂಬಗಳ ಮೇಲೆ ಗಜ-ಮಿಥುನ ವಿಗ್ರಹಗಳು.

ಕಾರ್ಲೆಯ ಚೈತ್ಯಗಳಲ್ಲಿ ಬೃಹದಾಕಾರದ ಕಲಾತ್ಮಕ ಶಿಲ್ಪಗಳ ಕೆತ್ತನೆ ಇದ್ದರೂ ಬುದ್ಧನ ಪ್ರತಿಮೆ ಮಾತ್ರ ಎಲ್ಲಿಯೂ ಎದ್ದು ಕಾಣಿಸುವುದಿಲ್ಲ. ಒಂದು ಕಡೆ ಮಾತ್ರ ಬುದ್ಧನ ಚಿಕ್ಕ ಮೂರ್ತಿ ಇದೆ. ಕಾರ್ಲೆಯ ಚೈತ್ಯಗಳ ಕೆತ್ತನೆಯ ಪ್ರಾರಂಭದ ಕಾಲಘಟ್ಟದಲ್ಲಿ ಬುದ್ಧನ ಮೂರ್ತಿಗೆ ಸಂಬಂಧಿಸಿದಂತೆ ವಿಶೇಷ ಮಹತ್ವ ನೀಡಿದಂತೆ ಕಾಣುವುದಿಲ್ಲ. ನಾಲ್ಕನೇ ಶತಮಾನದ ನಂತರ ಮಹಾಯಾನ ಪಂಥದವರು ಚೈತ್ಯಗಳ ನಿರ್ಮಾಣ ಕಾರ್ಯದಲ್ಲಿ ಆಸಕ್ತಿ ವಹಿಸಿದ ನಂತರ ಬುದ್ಧನ ಮೂರ್ತಿಗಳ ನಿರ್ಮಾಣಕ್ಕೆ ಮಹತ್ವ ದೊರೆತದ್ದು ಕಾಣುತ್ತದೆ.

# ಹೀಗಿದ್ದರು ಸರ್ ಸಿ.ಪಿ. ರಾಮಸ್ವಾಮಿ ಅಯ್ಯರ್

**ಟೀಕಲ್ ಗೋಪಾಲಕೃಷ್ಣ**

1953 ರಲ್ಲಿ ನಾನು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್ಸಿ ಓದುತ್ತಿದ್ದಾಗ ಒಮ್ಮೆ ಸರ್ ಸಿ.ಪಿ. ಯವರು ಭಾಷಣ ಮಾಡಲು ಬಂದಿದ್ದರು. ಜಮ್ ಎಂದು ಮುಕ್ಕಾಲು ಗಂಟೆ ಇಂಗ್ಲೀಷಿನಲ್ಲಿ ಭಾಷಣ ಮಾಡಿ ಕುಳಿತಾಗ ನಿಶ್ಯಬ್ಧವಾಗಿದ್ದ ಆ ದೊಡ್ಡ ಹಾಲಲ್ಲಿ ಕರತಾಡನ ಐದು ನಿಮಿಷಗಳ ವರೆಗೆ ನಿಲ್ಲಲಿಲ್ಲ.



ಒಳ್ಳೆಯ ಅಜಾನು ಬಾಹು. ಕ್ಲೋಸ್ ಕಾಲರ್ ಕೋಟು, ಪ್ಯಾಂಟು, ಬೂಟು, ತಲೆಯ ಮೇಲೆ ಬಿಳಿ ಪೇಟ, ಕನ್ನಡಕ. ಆ ಮುದಿ ವಯಸ್ಸಿನಲ್ಲೂ ಮುಖದ ಮೇಲೆ ವರ್ಚಸ್ಸು ಎದ್ದು ಕಾಣುತ್ತಿತ್ತು.

ಆಧುನಿಕ ಭಾರತದ ನಿರ್ಮಾಪಕರಾದ ತಿಲಕ್, ಗೋಖಲೆ, ಸಿ.ಆರ್. ದಾಸ, ಗಾಂಧಿ, ನೆಹರು, ಸರೋಜಿನಿ ನಾಯ್ಡು, ಸರ್ ಎಂ. ವಿಶ್ವೇಶ್ವರಯ್ಯ ಅವರ ಸಾಲಿನಲ್ಲಿ ಸರ್ ಸಿ.ಪಿ. ರಾಮಸ್ವಾಮಿ ಅಯ್ಯರ್‌ರವರ ಹೆಸರೂ ಅಮರವಾಗಿದೆ.

ಅವರು ಹತ್ತು ವರ್ಷಗಳ ಕಾಲ ತಿರುವಾಂಕೂರಿನಲ್ಲಿ ದಿವಾನರಾಗಿದ್ದರು. ಆಗ ಅವರು ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತಂದರು. ಆಗಿನ ಕಾಲದಲ್ಲಿ ದಲಿತರಿಗೆ ದೇವಸ್ಥಾನಗಳಲ್ಲಿ ಪ್ರವೇಶ ನೀಡಬೇಕೆಂದು ಆಜ್ಞೆ ಮಾಡಿದ ಸಾಹಸಿ ಅವರು, ಅವರ ಕಾಲದಲ್ಲಿ ನದಿಗಳಿಗೆ ಕಟ್ಟೆಗಳನ್ನು ಕಟ್ಟಲಾಯಿತು. ಗೊಬ್ಬರದ ಕಾರ್ಖಾನೆ ನಿರ್ಮಾಣವಾಯಿತು. ಕಾಲುವೆಗಳು ಆದವು. ವಿದ್ಯುಚ್ಛಕ್ತಿ ವ್ಯವಸ್ಥೆ ರೂಪಿಸಲಾಯಿತು.

ಸಿ.ಪಿ. ರಾಮಸ್ವಾಮಿ ಅಯ್ಯರ್ ವೈಸ್‌ರಾಯರ ಎಕ್ಸಿಕ್ಯುಟಿವ್ ಕೌನ್ಸಿಲ್ ಸದಸ್ಯರಾಗಿದ್ದರು. ಆನಿಬೆಸೆಂಟರ ಸ್ನೇಹಿತರಾಗಿದ್ದರು. ಮೋತಿಲಾಲ್ ನೆಹರುರವರಿಗೆ ಕಾನೂನು ಸಲಹೆಗಾರರು ಆಗಿದ್ದರು. ಮೂರು ವಿಶ್ವವಿದ್ಯಾಲಯಗಳಿಗೆ ಉಪಕುಲಪತಿ ಆಗಿದ್ದರು. ಲಂಡನ್‌ದಲ್ಲಿ ಜರುಗಿದ ಮೂರನೇ ಚಕ್ರಗೋಷ್ಠಿಯಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ್ದರು.

ಒಮ್ಮೆ ಸರ್ ಸಿ.ಪಿ. ಪಂಜಾಬ್ ವಿಶ್ವವಿದ್ಯಾಲಯದ ಕಾನ್ವೋಕೇಷನ್ ಭಾಷಣ ಮಾಡಲು ಲಾಹೋರಿಗೆ ಹೋಗಿದ್ದಾಗ ಅಲ್ಲಿ ನೆರೆದಿದ್ದವರನ್ನು ತಮ್ಮ ಇಂಗ್ಲೀಷ್ ವಾಗ್ವೈಖರಿಯಿಂದ ಮಂತ್ರ ಮುಗ್ಧರನ್ನಾಗಿ ಮಾಡಿದರಂತೆ, ಅವರು ಹಾಸ್ಯ ಪ್ರವೃತ್ತಿಯವರೂ ಆಗಿದ್ದರು. ಆಂಗ್ಲ ಹೆಂಗಸರು ತಮ್ಮನ್ನು ದಿವಾನ್ ಎಂದು ಕರೆಯಲು ಬಾರದೆ, ಡಿಯರ್ ವನ್ ಎನ್ನುತ್ತಾರೆ ಎಂದು ತಮಾಷೆಯಾಗಿ ನುಡಿದು ಎಲ್ಲರನ್ನು ನಗೆಯ ಹೊಳೆಯಲ್ಲಿ ತೇಲಿಸಿದರಂತೆ, ಸರ್ ಸಿ.ಪಿ. ಅವರ ಮಗಳ ಹೆಸರು ನಂದಿತ ಕೃಷ್ಣ. ಚೆನ್ನೈನಲ್ಲಿ ಗ್ರೋವ್ ಎಂಬ ಇವರ ತಾತನ ಬಂಗಲೆಯಲ್ಲಿ ನೆಲಸಿದ್ದಾರೆ. ನಂದಿತ ಕೂಡ ಅನೇಕ ಪುಸ್ತಕಗಳನ್ನು ಬರೆದಿದ್ದಾಳೆ.

ಸರ್. ಸಿ.ಪಿ. 1879 ರಲ್ಲಿ ದೀಪಾವಳಿಯ ಶುಭದಿನದಂದು ಜನಿಸಿದರು. ಬಾಲ್ಯದ ದಿನಗಳಿಂದಲೇ ಎಲ್ಲಾ ಪರೀಕ್ಷೆಗಳಲ್ಲೂ ಮೊದಲ ಶ್ರೇಣಿಯಲ್ಲಿ ತೇರ್ಗಡೆಯಾಗುತ್ತಿದ್ದುದರಿಂದ